# ಭಾಷೆಯ ಮಹತ್ವ

Importance of Language

– ರೋಹಿತ್ ಧನಕರ್

ಪ್ರಾಥಮಿಕ ಶಿಕ್ಷಣದಲ್ಲಿ ಭಾಷೆಗಿರುವ ಮಹತ್ವವನ್ನು ಮತ್ತು ಅದರ ಮೇಲೆ ಮಗು ಹೊಂದಿರುವ ಹಿಡಿತವನ್ನು ಎಲ್ಲರೂ ಅಂಗೀಕರಿಸುತ್ತಾರೆ. ಈ ಅಂಗೀಕಾರಕ್ಕೆ ಕಾರಣಗಳನ್ನು ಕಂಡುಕೊಳ್ಳುವುದು ಕಷ್ಟವೇನಲ್ಲ.

ಮಗುವಿಗೆ ಮತ್ತು ಎಲ್ಲರಿಗೂ ಸಂವಹನಕ್ಕೆ ಭಾಷೆಯು ಅತ್ಯಗತ್ಯ ಎಂಬುದು ಸ್ಪಷ್ಟವಾಗಿದೆ. ಆದ್ದರಿಂದ ಗಣಿತ, ವಿಜ್ಞಾನ ಅಥವಾ ಇನ್ಯಾವುದೇ ವಿಷಯಗಳ ಬಗ್ಗೆ ತಿಳುವಳಿಕೆಯನ್ನು ಪಡೆಯಲು ಭಾಷೆಯು ಅತ್ಯಗತ್ಯ. ವಾಸ್ತವವಾಗಿ, ಶಿಕ್ಷಣದ ಎಲ್ಲಾ ಅಂಶಗಳನ್ನು ಮಗುವು ಭಾಷೆಯ ಮೂಲಕವೇ ಅರ್ಥಮಾಡಿಕೊಳ್ಳುತ್ತದೆ. ವಾಸ್ತವವಾಗಿ ಮಗುವು ಭಾಷೆಯ ಮೂಲಕ ಮತ್ತು ಭಾಷೆಯಿಂದಲೇ ಯೋಚಿಸುತ್ತದೆ, ನಿರ್ಧಾರಗಳನ್ನು ತೆಗೆದುಕೊಳ್ಳುತ್ತದೆ ಮತ್ತು ಕಾರ್ಯನಿರ್ವಹಿಸುತ್ತದೆ. ಸಮಾಜದ ಭಾಗವಾಗಿ ಬದುಕಲು ಮಗುವಿಗೆ (ಎಲ್ಲರಂತೆ) ಭಾಷೆಯು ಕೇಂದ್ರವಾಗಿದೆ.

ಮಗುವಿನ ಶಿಕ್ಷಣ ಮತ್ತು ಬೆಳವಣಿಗೆಯಲ್ಲಿ ಭಾಷೆಯ ಕೇಂದ್ರೀಯತೆಯನ್ನು ಅಥವಾ ಮಹತ್ವವನ್ನು ಅರ್ಥಮಾಡಿಕೊಳ್ಳಬೇಕಾದರೆ ಮೇಲಿನ ಅಂಶಗಳನ್ನು  ಕಡ್ಡಾಯವಾಗಿ ಪರಿಗಣಿಸಬೇಕಾಗುತ್ತದೆ. ಆದರೆ ಮೇಲಿನ ಅಂಶಗಳಿಗೆ ಅದರದ್ದೇ ಆದ ಮಿತಿಗಳಿವೆ. ಅದೇನೆಂದರೆ, ಭಾಷೆಯನ್ನು ಒಂದು "ಸಾಧನ" ಎಂದು ಪರಿಗಣಿಸುವುದಾಗಿದೆ; ಗಣಿತವನ್ನು ಅರ್ಥಮಾಡಿಕೊಳ್ಳಲು ಅಥವಾ ನಿರ್ಧಾರಗಳನ್ನು ತೆಗೆದುಕೊಳ್ಳಲು ಒಂದು "ಸಾಧನ" ಎಂದು ನೋಡುವುದರಲ್ಲಿದೆ. ಭಾಷೆಯು ನಿಜವಾಗಿಯೂ ಒಂದು ಸಾಧನವಾಗಿರಬಹುದು. ಆದರೆ ಭಾಷೆ

ಅದಕ್ಕಿಂತಲೂ ಹಿರಿದಾದ ಒಂದು ಪರಿಕಲ್ಪನೆಯಾಗಿದೆ.. ಈ "ಹಿರಿದಾದ"ಪರಿಕಲ್ಪನೆ ಬಹುಶಃ ಶಿಕ್ಷಣದಲ್ಲಿ ಮತ್ತು ಒಟ್ಟಾರೆಯಾಗಿ ಮಾನವ ಜೀವನದಲ್ಲಿ, ಮಗುವಿಗೆ ಸಂಬಂಧಿಸಿದಂತೆ ಭಾಷೆಯ ಮಹತ್ವವನ್ನು ಸ್ಪಷ್ಟಪಡಿಸುತ್ತದೆ.

ನಾವು ಮನುಷ್ಯರು ನಮ್ಮ ಸುತ್ತಲಿನ ಪ್ರಪಂಚವನ್ನು ನೋಡುವುದು, ಅನುಭವಿಸುವುದು ಮಾತ್ರವಲ್ಲ, ಹಾಗೆ ನೋಡಿದ, ಮತ್ತು ಅನುಭವಿಸಿದ ಎಲ್ಲದಕ್ಕೂ ಒಂದು ಅರ್ಥವನ್ನು ನೀಡುತ್ತೇವೆ. ಹೀಗಾಗಿ ನಾನು ಕಪ್ಪು ಮಳೆಗಾಲದ ಮೋಡಗಳನ್ನು ಕಂಡಾಗ, ಕೇವಲ ಕೆಲವು ಆಕಾರಗಳನ್ನು ನೋಡಿದಾಗ ಉಂಟಾಗುವ ಪರಿಣಾಮವಷ್ಟೇ ನನಗಾಗುವುದಿಲ್ಲ. ಬದಲಾಗಿ, ಕಪ್ಪು ಮೋಡಗಳು, ಮಳೆಯ, ನವಿಲುಗಳ ನೃತ್ಯದ, ಒದ್ದೆ ಬಟ್ಟೆಯ ಇರುಸುಮುರುಸಿನ ಅನುಭವಗಳೊಂದಿಗೆ ಸೇರಿ, ಬೆಸೆದುಕೊಂಡು ಒಟ್ಟಾರೆಯಾದ ಸಂಕೀರ್ಣ ಪರಿಣಾಮವನ್ನು ಉಂಟುಮಾಡುತ್ತದೆ. ನಾನು ಈ ಸಂಪರ್ಕಗಳನ್ನು ಮತ್ತು ಬೆಸುಗೆಗಳನ್ನು ಮಾಡದಿದ್ದರೆ, ಕಪ್ಪು ಮೋಡಗಳು ನನ್ನ ಪಾಲಿಗೆ ಏನೂ ಅಲ್ಲ; ನನ್ನ ಮೇಲೆ ಯಾವುದೇ ಪರಿಣಾಮವನ್ನೂ ಬೀರುವುದಿಲ್ಲ; ಅವು ನಾನು ಗ್ರಹಿಸಿದ ಒಂದು ಆಕಾರವಾಗಿ ಮಾತ್ರ ಉಳಿಯುತ್ತವೆ.

ಈ 'ಬೆಸುಗೆಯೇ' ಈ ಜಗತ್ತಿನಲ್ಲಿ ಎಲ್ಲದಕ್ಕೂ ಅರ್ಥ ನೀಡುತ್ತದೆ. ಈ ಅರ್ಥಗಳ ಸೇರ್ಪಡೆಯೇ ವಸ್ತುಗಳ ಸ್ಥಿತಿಯನ್ನು (ವಿಶೇಷವಾಗಿ ನಮ್ಮ ಪ್ರಜ್ಞಾಪೂರ್ವಕ ಸ್ಥಿತಿಯಲ್ಲಿ) ಕೇವಲ "ಇರುವಿಕೆ" ಯಿಂದ "ಅರ್ಥಪೂರ್ಣವಾಗಿ ಇರುವಿಕೆ" ಗೆ ಬದಲಾಯಿಸುತ್ತದೆ. ಈ ಅರ್ಥಪೂರ್ಣತೆಯನ್ನು ನಾವು ಪರಿಕಲ್ಪನೆಗಳ ಮೂಲಕ ತುಂಬುತ್ತೇವೆ. ಈ ಪರಿಕಲ್ಪನೆಗಳನ್ನು ಅಭಿವೃದ್ಧಿಪಡಿಸಲು ಮತ್ತು ಅರ್ಥಮಾಡಿಕೊಳ್ಳಲು ನಾವು ನಮ್ಮ ಮನಸ್ಸಿನಲ್ಲಿ ಹಲವಾರು ಚಿಹ್ನೆಗಳನ್ನು ನಿರ್ಮಿಸುತ್ತೇವೆ ಮತ್ತು ಚಿಹ್ನೆಗಳು ಮತ್ತು ಪರಿಕಲ್ಪನೆಗಳ ನಡುವಿನ ಸಂಬಂಧಗಳು ಮತ್ತು ಬೆಸುಗೆಗಳನ್ನು ಅಭಿವೃದ್ಧಿಪಡಿಸುತ್ತೇವೆ. ಈ ಚಿಹ್ನೆಗಳನ್ನು ನಿರ್ಮಿಸುವ ಮೇಲಿನ ಮಾನಸಿಕ ಚಟುವಟಿಕೆ ("ಸಾಂಕೇತಿಕ ವಹಿವಾಟು" ) ಈ ರಚನೆಯ ಪ್ರಕ್ರಿಯೆಯಾಗಿದೆ.

ಭಾಷೆಯು ಈ ಸಾಂಕೇತಿಕ ವ್ಯವಹಾರದ ಅಡಿಪಾಯವಾಗಿದೆ ಮತ್ತು ವಾಸ್ತವವಾಗಿ ಈ ಸಂಪೂರ್ಣ ಪ್ರಕ್ರಿಯೆಯ ಅವಿಭಾಜ್ಯ ಮತ್ತು ಅಂತರ್ಗತ ಅಂಶವಾಗಿದೆ. ಇದು ಯಾವುದೇ ವ್ಯಕ್ತಿಯ "ಪರಿಕಲ್ಪನಾ ವ್ಯವಸ್ಥೆ" ಯ ರಚನೆಗೆ ಕಾರಣವಾಗುತ್ತದೆ.

ಪರಿಕಲ್ಪನೆಗಳಿಗೆ "ಹೆಸರುಗಳನ್ನು" ನೀಡದಿದ್ದರೆ, ಇದ್ಯಾವುದೂ ಸಾಧ್ಯವಾಗುವುದಿಲ್ಲ. ನಾವು ಭಾಷೆಯಲ್ಲಿ "ಪದಗಳು" ಎಂದು ಯಾವುದನ್ನು ತಿಳಿದಿದ್ದೇವೆಯೋ ಅವುಗಳೇ ಈ "ಹೆಸರುಗಳು" . "ಪರಿಕಲ್ಪನಾ ವ್ಯವಸ್ಥೆ" ಯ ಅಭಿವೃದ್ಧಿ ಮತ್ತು ರಚನೆಯನ್ನೇ ನಾವು ತಿಳುವಳಿಕೆಯನ್ನು ಪಡೆಯುವುದು ಎಂದು ಕರೆಯುತ್ತೇವೆ. ಆದ್ದರಿಂದ, ಭಾಷೆ ಮತ್ತು ತಿಳುವಳಿಕೆಗಳು ಪರಸ್ಪರ ಅವಲಂಬಿತವಾಗಿವೆ. ಒಂದರ ಅಸ್ತಿತ್ವ ಇನ್ನೊಂದಿಲ್ಲದೆ ಸಾಧ್ಯವಿಲ್ಲ.

ಹೀಗಾಗಿ, ಭಾಷೆ ಕೇವಲ ಒಂದು "ಸಾಧನ" ಅಲ್ಲ. ಅದು ತಿಳುವಳಿಕೆಯ ಅವಿಭಾಜ್ಯ ಮತ್ತು ಅಂತರ್ಗತ ಭಾಗವಾಗಿದೆ. ಮಾನವ ಮನಸ್ಸು ಮತ್ತು ಸ್ವ-ಪ್ರಜ್ಞೆ ಸಾಧ್ಯವಾಗುವುದೇ ಭಾಷೆಯಿಂದ. ಏಕೆಂದರೆ, ಮನುಷ್ಯನ ಮನಸ್ಸು ಎಂದರೆ, ಅವನ ಒಟ್ಟು ಗ್ರಹಿಕೆಯ ಮೊತ್ತವೇ ಅಲ್ಲವೇ? ಇದು ಗ್ರಹಿಕೆಯ ಬೆಳವಣಿಗೆಯೊಂದಿಗೆ ಅಭಿವೃದ್ಧಿಗೊಳ್ಳುತ್ತದೆ ಮತ್ತು ಗ್ರಹಿಕೆಯನ್ನು ನಿರ್ಬಂಧಿಸಿದಾಗ ನಿರ್ಬಂಧಿತವಾಗುತ್ತದೆ. ಈ ತೀರ್ಮಾನವು ಪ್ರಾಥಮಿಕ ಶಿಕ್ಷಣದಲ್ಲಿ ನಿರ್ಣಾಯಕ ಪ್ರಾಮುಖ್ಯವನ್ನು ಹೊಂದಿದೆ.

ಒಂದು ಹಂತದ ತಿಳಿವಳಿಕೆ ಮತ್ತು ಭಾಷಾಜ್ಞಾನ ಬಂದ ಮೇಲೆ ತಿಳಿವಳಿಕೆಯ ಹಾಗೂ ಭಾಷಾಜ್ಞಾನದ ತಳಪಾಯ ತಕ್ಕಮಟ್ಟಿಗೆ ದೃಢವಾಗುತ್ತದೆ. ಭಾಷಾಜ್ಞಾನದ ಹಂಗಿಲ್ಲದೇ ತಿಳಿವಳಿಕೆ ಹಾಗೆಯೇ ತಿಳಿವಳಿಕೆಯ ಹಂಗಿಲ್ಲದೇ ಭಾಷಾಜ್ಞಾನ ಬೆಳೆಯುವ ಸಾಧ್ಯತೆ ಇದೆ.
ಆದರೆ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಈ "ವಿಭಜನೆ" ಸಾಧ್ಯವಿಲ್ಲ. ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಭಾಷೆಯ ಮತ್ತು ತಿಳುವಳಿಕೆಯ ಬೆಳವಣಿಗೆಯು ಮಗುವಿನ ಮಾನಸಿಕ ಬೆಳವಣಿಗೆಯ ಎರಡು ಅವಿಭಾಜ್ಯ ಪೂರಕ ಅಂಶಗಳಾಗಿವೆ.

ಭಾಷೆಯ ಕೆಲವು ಅಂಶಗಳನ್ನು ಸಹ ನಾವು ನೋಡೋಣ.

ಆಡು ಭಾಷೆಯ ಮೂಲ ಘಟಕವು ಪದವಾಗಿದೆ. ಪದವು ಶಬ್ದಗಳ ಸಂಯೋಜನೆಯಾಗಿದೆ. ಈ ಶಬ್ದಗಳ ಸಂಯೋಜನೆಯನ್ನು ಪರಿಕಲ್ಪನೆಯೊಂದಿಗೆ ಜೋಡಿಸದಿದ್ದರೆ, ಅದು ಶಬ್ದಗಳ ಅರ್ಥಹೀನ ಸಂಯೋಜನೆಯಾಗಿ ಉಳಿಯುತ್ತದೆಯೇ ಹೊರತು ಪದ ಆಗುವುದಿಲ್ಲ. ನಿರ್ದಿಷ್ಟ ಪರಿಕಲ್ಪನೆಗೆ ಶಬ್ದಗಳ (ಪದ) ನಿರ್ದಿಷ್ಟ ಸಂಯೋಜನೆಯನ್ನು ಬೆಸೆಯುವಿಕೆ ಯಾವುದೇ ತಾರ್ಕಿಕ ಆಧಾರಗಳು ಅಥವಾ ನಿಯಮಗಳನ್ನು ಹೊಂದಿಲ್ಲ. ಈ ಬೆಸುಗೆಯು ಯಾದೃಚ್ಛಿಕವಾಗಿದೆ. ಬೆಸುಗೆಯು ಯಾದೃಚ್ಛಿಕವಾಗಿದ್ದರೂ, ನಿರ್ದಿಷ್ಟ ಭಾಷೆಯ ಬಳಕೆದಾರರೊಳಗೆ ಇದು ಸ್ಥಿರವಾಗಿರುತ್ತದೆ ಮತ್ತು ಸಾರ್ವತ್ರಿಕವಾಗಿರುತ್ತದೆ. “ಟ್ರೀ” ಎಂಬುದು ಶಬ್ದಗಳ ಸಂಯೋಜನೆಯಾಗಿದ್ದು ಇದು ನಿರ್ದಿಷ್ಟ ಪರಿಕಲ್ಪನೆಗೆ ಸಂಬಂಧಿಸಿದೆ ಮತ್ತು ಪದ-ಪದಾರ್ಥಗಳ ನಡುವಿನ ಈ ಸಂಬಂಧವು ಸ್ಥಿರವಾಗಿರುತ್ತದೆ. ನಂತರದಲ್ಲಿ ಇತರ ಕೆಲವು ಶಬ್ದಗಳ ಸಂಯೋಜನೆಯು ಈ ಪರಿಕಲ್ಪನೆಯೊಂದಿಗೆ ಸಂಬಂಧ ಹೊಂದುವುದಿಲ್ಲ. ಉದಾಹರಣೆಗೆ, ಆ ಪರಿಕಲ್ಪನೆಗೆ “ಟ್ರೀ” ಎಂಬ ಪದದ ಸಂಬಂಧವು “ಕ್ರಿಕೆಟ್” ನಂತೆಯೇ ಯಾದೃಚ್ಛಿಕವಾಗಿದ್ದರೂ, ನಾಳೆ “ಕ್ರಿಕೆಟ್” ಎಂಬ ಮತ್ತೊಂದು ಶಬ್ದಗಳ ಸಂಯೋಜನೆಯು, “ಟ್ರೀ” ಎಂಬ ಇಂದಿನ ಅರ್ಥಕ್ಕೆ ಸಂಬಂಧಿಸುವುದಿಲ್ಲ.

ಅರ್ಥಪೂರ್ಣ ಭಾಷೆಯನ್ನು ರಚಿಸಲು, ಪದಗಳನ್ನು ನಿಯಮಗಳ ಒಂದು ವ್ಯವಸ್ಥೆಯೊಂದಿಗೆ (ನಿಯಮಗಳ ಮೂಲಕ) ಬಳಸಲಾಗುತ್ತದೆ. ಉದಾಹರಣೆಗೆ, ಪದಗಳ ಅನುಕ್ರಮವು ಸೂಕ್ತವಾದ ಅರ್ಥವನ್ನು ರಚಿಸಲು ಕೆಲವು ನಿಯಮಗಳನ್ನು ಅನುಸರಿಸುತ್ತದೆ. ಈ ನಿಯಮಗಳು ಸಹ ಅನಿಯಂತ್ರಿತವಾಗಿವೆ. ಆದರೆ ಅವು ಸ್ಥಿರವಾಗಿರುತ್ತವೆ ಮತ್ತು ಸಾರ್ವತ್ರಿಕವಾಗಿರುತ್ತವೆ. ಆದ್ದರಿಂದ ಭಾಷೆಯು ನಿಯಮಬದ್ಧವಾದ ಶಾಬ್ದಿಕ ಸಂಕೇತಗಳ ವ್ಯವಸ್ಥೆ. ಇದರ ಮೂಲಕ ಮಾನವರು ಅರ್ಥವನ್ನು ಸೃಷ್ಟಿಸುತ್ತಾರೆ. ಇದು ಸಂಪೂರ್ಣವಾಗಿ ಮಾನವ ನಿರ್ಮಿತವಾದ ಸುಸಂಘಟಿತ

ವ್ಯವಸ್ಥೆ. (ಯಾವುದೇ) ಭಾಷೆಯಲ್ಲಿನ ಧ್ವನಿ ಸಂಯೋಜನೆಗಳ ಸಂಖ್ಯೆ ಸೀಮಿತವಾಗಿದೆಯಾದರೂ, ಅರ್ಥಗಳನ್ನು ನಿರ್ಮಿಸುವ ಭಾಷಾ ವ್ಯವಸ್ಥೆಯ ಸಾಮರ್ಥ್ಯವು ಅನಂತವಾಗಿದೆ.

ಭಾಷೆಯನ್ನು ಕಲಿಯುವುದು ಎಂದರೆ ಅದರ ಮೇಲೆ ಹಿಡಿತವನ್ನು ಸಾಧಿಸಿ ನಂತರ ಅರ್ಥವನ್ನು ನಿರ್ಮಿಸಲು, ಸ್ವಾಧೀನಪಡಿಸಿಕೊಳ್ಳಲು ಮತ್ತು ಅಭಿವ್ಯಕ್ತಿಗೊಳಿಸಲು ಈ ವ್ಯವಸ್ಥೆಯನ್ನು ಬಳಸುವುದು ಎಂದು ಅರ್ಥ.

ಮಾತನಾಡುವ ಭಾಷೆಯು ಧ್ವನಿ ಸಂಕೇತಗಳಿಂದ ಮಾಡಲ್ಪಟ್ಟಿದೆ. ಅದೇ ರೀತಿ ಲಿಖಿತ ಭಾಷೆಯು ದೃಶ್ಯ ಸಂಕೇತಗಳಿಂದ ಮಾಡಲ್ಪಟ್ಟಿದೆ; ಅಥವಾ ಒಂದು ಮೇಲ್ಮೈಯ ಗುರುತುಗಳನ್ನು ಒಳಗೊಂಡಿವೆ. ಗುರುತುಗಳು ಎಂದರೆ ಇಲ್ಲಿ ಅಕ್ಷರಗಳಾಗಿವೆ. ವರ್ಣಮಾಲೆಯ ಅಕ್ಷರಗಳು (ಅಥವಾ ಅವುಗಳ ಸಂಯೋಜನೆಗಳು) ಶಬ್ದಗಳನ್ನು ಪ್ರತಿನಿಧಿಸುತ್ತವೆ. ಶಬ್ದಗಳೊಂದಿಗಿನ ಈ "ಗುರುತುಗಳ" ಸಂಬಂಧವು ಯಾದೃಚ್ಛಿಕವಾಗಿದೆ, ಆದರೆ ಸ್ಥಿರ ಮತ್ತು ಸಾರ್ವತ್ರಿಕವಾಗಿದೆ. ನಾವು ಯಾವಾಗಲೂ (ಮಾನಸಿಕವಾಗಿ) ಲಿಖಿತ ಭಾಷೆಯನ್ನು ಮಾತನಾಡುವ ಭಾಷೆಗೆ "ಭಾಷಾಂತರ" ಮಾಡುತ್ತೇವೆ ಮತ್ತು ಅದರಿಂದ ಅರ್ಥವನ್ನು ಪಡೆಯುತ್ತೇವೆ. ಆದ್ದರಿಂದ, ಮಾತನಾಡುವ ಭಾಷೆಗೆ ಹೋಲಿಸಿದರೆ ಲಿಖಿತ ಭಾಷೆಯ ಮೂಲಕ ಅರ್ಥವನ್ನು ತಲುಪಲು ಹೆಚ್ಚಿನ ಹಂತಗಳಿವೆ.

ಆಡು ಭಾಷೆಯ ಸಂವಹನಗಳಲ್ಲಿ "ಅಶಾಬ್ದಿಕ ಸಂವಹನ" (ಉದಾಹರಣೆಗೆ ಒಬ್ಬರ ಮುಖದ ಮೇಲಿನ ಅಭಿವ್ಯಕ್ತಿ, ಕೈಯ ಸನ್ನೆಗಳು) ಮತ್ತು ತಕ್ಷಣದ ಸ್ಪಷ್ಟೀಕರಣಕ್ಕೆ ಅವಕಾಶವಿದೆ. ಲಿಖಿತ ಭಾಷೆಯಲ್ಲಿ ಇದು ಸಾಮಾನ್ಯವಾಗಿ ಸಾಧ್ಯವಿಲ್ಲ. ಆದ್ದರಿಂದ ಬರವಣಿಗೆ ಭಾಷೆಯು ಕೆಲವು ಹೆಚ್ಚುವರಿ ಚಿಹ್ನೆಗಳನ್ನು ಬಳಸುತ್ತದೆ ಮತ್ತು ನಿಯಮಗಳ ಬಿಗಿಯಾದ ವ್ಯವಸ್ಥೆಯನ್ನು ಅನುಸರಿಸುತ್ತದೆ.

ಈ ಸಂಕ್ಷಿಪ್ತ ಲೇಖನದ ಉದ್ದೇಶವು 'ಭಾಷಾಶಾಸ್ತ್ರೀಯ ವಿಶ್ಲೇಷಣೆ' ಯಲ್ಲ, ಬದಲಾಗಿ ಪ್ರಾಥಮಿಕ ಹಂತದಲ್ಲಿ ಬೋಧನೆ-ಕಲಿಕೆಗೆ ನೇರವಾದ ಕೆಲವು ಸಮಸ್ಯೆಗಳನ್ನು ಚರ್ಚಿಸುವುದು. ಈ ಸಂಕ್ಷಿಪ್ತ ಲೇಖನದಲ್ಲಿ ನಾವು ತಲುಪಿದ ಕೆಲವು ತೀರ್ಮಾನಗಳು ಈ ಕೆಳಗಿನಂತಿವೆ:

೧. ಮಗುವಿನ ತಿಳುವಳಿಕೆಯ ಬೆಳವಣಿಗೆ ಮತ್ತು ಭಾಷೆಯ ಬೆಳವಣಿಗೆಯು ಯಾವುದೇ ಮಗುವಿಗೆ ಸಂಪೂರ್ಣವಾಗಿ ಪರಸ್ಪರ ಅವಲಂಬಿತವಾಗಿವೆ.

೨. ಪರಿಕಲ್ಪನೆಗಳು ಮತ್ತು ಶಬ್ದಗಳ ಸಂಯೋಜನೆಯ ನಡುವಿನ ಸಂಬಂಧ ("ಪದಗಳು" ಎಂದು ಕರೆಯಲಾಗುವ) ಯಾದೃಚ್ಛಿಕವಾಗಿದೆ ಮತ್ತು ಯಾವುದೇ ತಾರ್ಕಿಕ ಆಧಾರಗಳನ್ನು ಹೊಂದಿಲ್ಲ. ಆದಾಗ್ಯೂ, ಈ ಸಂಬಂಧವು ಸಾರ್ವತ್ರಿಕ ಮತ್ತು ಸ್ಥಿರವಾಗಿದೆ.

೩. ವಾಕ್ಯಗಳನ್ನು ರೂಪಿಸಲು ಮತ್ತು ಅರ್ಥವನ್ನು ರಚಿಸಲು ಪದಗಳ ಬಳಕೆಗೆ ನಿಯಮ ವ್ಯವಸ್ಥೆಗಳು ಸಹ ಅನಿಯಂತ್ರಿತವಾಗಿವೆ, ಆದಾಗ್ಯೂ, ಅವು ಸ್ಥಿರ ಮತ್ತು ಸಾರ್ವತ್ರಿಕವಾಗಿವೆ.

೪. ಆದ್ದರಿಂದ, ಭಾಷೆಯು ಸುಸಂಘಟಿತ ಸಾಂಕೇತಿಕ ವ್ಯವಸ್ಥೆಯಾಗಿದೆ.

೫. ಅರ್ಥಗಳನ್ನು ನಿರ್ಮಿಸುವ ಭಾಷಾ ವ್ಯವಸ್ಥೆಯ ಸಾಮರ್ಥ್ಯವು ಅಪರಿಮಿತವಾಗಿದೆ.

೬. ಲಿಖಿತ ಭಾಷೆಯಲ್ಲಿರುವ ಅಕ್ಷರಗಳು ಶಬ್ದಗಳ ಸಂಯೋಜನೆಗೆ ಸಂಬಂಧಿಸಿವೆ ಮತ್ತು ಅವುಗಳನ್ನು ಪ್ರತಿನಿಧಿಸುತ್ತವೆ. ಈ ಸಂಬಂಧವು ಸಹ ಅನಿಯಂತ್ರಿತವಾಗಿದೆ ಆದರೆ ಸ್ಥಿರ ಮತ್ತು ಸಾರ್ವತ್ರಿಕವಾಗಿದೆ.

೭. ಮಾತನಾಡುವ ಭಾಷೆಯಿಂದ ಅರ್ಥವನ್ನು ತಲುಪುವುದಕ್ಕೆ ಸಂಬಂಧಿಸಿದಂತೆ, ಲಿಖಿತ ಭಾಷೆಯಿಂದ ಅರ್ಥವನ್ನು ತಲುಪಲು ಒಂದು ಹೆಚ್ಚುವರಿ ಹಂತವನ್ನು ಹೊಂದಿದೆ.

ಪ್ರಾಥಮಿಕ ಹಂತದಲ್ಲಿ ಬೋಧನೆ-ಕಲಿಕೆಗಾಗಿ ಈ ತೀರ್ಮಾನಗಳ ಹಲವು ಪರಿಣಾಮಗಳ ಪೈಕಿ ಎರಡು ಪರಿಣಾಮಗಳತ್ತ ತ್ವರಿತ ಸುಳಿವು: ಯಾವುದು ಯಾದೃಚ್ಛಿಕವಾದುದು ಎಂಬುದನ್ನು ಮಗುವು ಏಕಾಂಗಿಯಾಗಿ ಕಂಡುಹಿಡಿಯಲು ಸಾಧ್ಯವಿಲ್ಲ. ಇದಕ್ಕೆ ಅಗತ್ಯವಾಗಿ ಇತರ ಭಾಷೆಯನ್ನು ಬಳಸುವವರ ಅವಲೋಕನದ ಅವಶ್ಯಕತೆ ಇದೆ, ಆ ಯಾದೃಚ್ಛಿಕ ಸಂಬಂಧವನ್ನು ಈಗಾಗಲೇ ಕರಗತ ಮಾಡಿಕೊಂಡಿರುವವರ ಸಹಾಯ ಬೇಕಿದೆ ಹಾಗೂ ಅಭ್ಯಾಸವನ್ನು ಬೇಡುತ್ತದೆ ಮತ್ತು ಪರಿಕಲ್ಪನಾ ತಿಳುವಳಿಕೆಗೆ ಮುನ್ನ ನಿಯಮಿತ ಅಭ್ಯಾಸಕ್ಕೆ ಆದ್ಯತೆಯನ್ನು ನೀಡಲಾಗುತ್ತದೆ. ಮಗುವು ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳುವುದರಿಂದ ಮಾತ್ರ ಯಾವುದು ನಿಯಮ-ನಿಯಂತ್ರಿತವೋ ಅದನ್ನು ವಾಸ್ತವವಾಗಿ ಕರಗತ ಮಾಡಿಕೊಳ್ಳಬಹುದು ಮತ್ತು ಅಭ್ಯಾಸಕ್ಕೆ ಹೋಲಿಸಿದರೆಪರಿಕಲ್ಪನಾತ್ಮಕ ತಿಳುವಳಿಕೆಯು ಹೆಚ್ಚಿನ ಆದ್ಯತೆಯನ್ನು ಪಡೆದುಕೊಳ್ಳುತ್ತದೆ. ಒಟ್ಟಾರೆ ಕಲಿಕೆಯ ಪ್ರಕ್ರಿಯೆಯು ಪರಿಕಲ್ಪನಾ ತಿಳುವಳಿಕೆ ಮತ್ತು ಅರ್ಥ ರಚನೆಯಿಂದ ಗುರುತಿಸಲ್ಪಟ್ಟಿದ್ದರೂ, ಭಾಷಾ ಕಲಿಕೆಗೆ ಎರಡೂ ಅಗತ್ಯವಿರಬಹುದು; ಆದರೆ ಬರವಣಿಗೆಯ ವ್ಯವಸ್ಥೆಯ ಮೇಲೆ ಪಾಂಡಿತ್ಯ ಸಾಧಿಸುವಂತಹ ಕೆಲವು ಪ್ರಕ್ರಿಯೆಗಳಲ್ಲಿ ಅಭ್ಯಾಸದ ಪಾತ್ರವನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲ.

ಲೇಖನದ ಈ ಸಣ್ಣ ತುಣುಕು ಸಹ ಕೆಲವು ವಿವಾದಾತ್ಮಕ ವಾದಗಳನ್ನು ಒಳಗೊಂಡಿದೆ; ಅವುಗಳ ಬಗೆಗಿನ ಸ್ಪಷ್ಟೀಕರಣವನ್ನೂ ಸಹ ಕ್ರಮವಾಗಿ ನೀಡಲಾಗಿದೆ. ಪದಗಳು ಯಾದೃಚ್ಛಿಕ ಕ್ರಮದ ಶಬ್ದಗಳ ಸಂಯೋಜನೆಗಳಾಗಿವೆ ಎಂದು ಹೇಳಲಾಗುತ್ತದೆ. ಶಬ್ದಗಳ ಸಂಯೋಜನೆಯಲ್ಲಿ ಪದ ರಚನೆಯು ಕೆಲವು ಸಾರ್ವತ್ರಿಕ ನಿಯಮಗಳನ್ನು ಅನುಸರಿಸುತ್ತದೆ ಎಂದು ಹೇಳಲು ಭಾಷಾಶಾಸ್ತ್ರದಲ್ಲಿ ಸಾಕಷ್ಟು ಸಂಶೋಧನೆಯು ಲಭ್ಯವಿದೆ. ಆದರೆ ಆ ನಿಯಮಗಳಿಗೆ ಬದ್ಧವಾದ ನಂತರವೂ ಸಹ, ಬಹುಪಾಲು ಜನರು ಶಬ್ದಗಳನ್ನು ಸಂಯೋಜಿಸುವಲ್ಲಿ ಮತ್ತು ಅವುಗಳಿಗೆ ಪರಿಕಲ್ಪನೆಗಳನ್ನು ಲಗತ್ತಿಸುವಲ್ಲಿ ಯಾದೃಚ್ಛಿಕ ಸ್ವಭಾವವನ್ನು ಉಳಿಸಿಕೊಂಡಿದ್ದಾರೆ. ಎರಡನೆಯ

ವಾದವು ಪದವು ಭಾಷೆಯ ಅತ್ಯಂತ ಚಿಕ್ಕ ಅರ್ಥಪೂರ್ಣ ಘಟಕವಾಗಿದೆ ಎಂಬ ವಾದದ ಕುರಿತಾದದ್ದು. ಆದರೆ ವಾಕ್ಯವು ಚಿಕ್ಕದಾದ ಅರ್ಥಪೂರ್ಣ ಘಟಕ ಎಂಬ ಬಗ್ಗೆ ಪ್ರಬಲವಾದ ವಾದವೂ ಉಂಟು. ಒಂದು ಜ್ಞಾನದ ವಿವರಣೆಯನ್ನೋ ಅಥವಾ, ವಿನಂತಿಯನ್ನೋ ಅಥವಾ ಪ್ರಶ್ನೆಯನ್ನೋ ವ್ಯಕ್ತಪಡಿಸಲು ವಾಕ್ಯವು ಚಿಕ್ಕ ಘಟಕ ಎಂಬುದು ಸತ್ಯವಿರಬಹುದು; ಆದರೆ ಮನಸ್ಸಿನಲ್ಲಿ ಒಂದು ವಿಚಾರವನ್ನು ಹುಟ್ಟುಹಾಕಲು ಒಂದೇ ಒಂದು ಪದ ಸಾಕಾಗುತ್ತದೆ. ಒಂದು ವಿಚಾರವನ್ನು ಹುಟ್ಟುಹಾಕುವುದೆಂದರೆ ಒಂದು ಅರ್ಥವನ್ನು ಹುಟ್ಟುಹಾಕುವುದು ಎಂದು ಪರಿಗಣಿಸಬೇಕು.

ಮೂರನೆಯ ವಾದವು ವಾಕ್ಯದಲ್ಲಿನ ಪದಗಳ ಯಾದೃಚ್ಛಿಕ ಕ್ರಮಬದ್ಧತೆಯ ಕುರಿತಾದದ್ದು. ಮತ್ತೊಮ್ಮೆ, ಭಾಷಾಶಾಸ್ತ್ರದ ಸಂಶೋಧನೆಯು ಎಲ್ಲಾ ಮಾನವ ಭಾಷೆಗಳಲ್ಲಿ ಒಂದು ವಾಕ್ಯದಲ್ಲಿನ ಪದಗಳ ಕ್ರಮವನ್ನು ನಿರ್ಧರಿಸಲು ಒಂದಲ್ಲ, ಹಲವಾರು ಸಾರ್ವತ್ರಿಕ ಮಾದರಿಗಳಿವೆ ಎಂಬುದನ್ನು ತೋರಿಸಿದೆ. ಈ ಕ್ರಮದಲ್ಲಿ ಮಕ್ಕಳು ಎಂದಿಗೂ ತಪ್ಪುಗಳನ್ನು ಮಾಡುವುದಿಲ್ಲ ಮತ್ತು ಮಾನವನ ಮನಸ್ಸಿನಲ್ಲಿ ಆ ನಿಯಮಗಳು ಸ್ವಾಭಾವಿಕವಾಗಿ ನೆಲೆಗೊಂಡಿವೆ ಎಂಬ ವಾದಗಳೂ ಸಹ ಇವೆ. ಒಂದಕ್ಕಿಂತ ಹೆಚ್ಚಿನ ವಾಕ್ಯ ರಚನೆಯ ಸಂಭವನೀಯತೆಯು ಇರುವುದರಿಂದ ಮಕ್ಕಳು ತಪ್ಪು ಮಾಡುತ್ತವೆ. ಆದ್ದರಿಂದ ಭಾಷಾ ಕಲಿಕೆಯಲ್ಲಿ ಅನುಭವವೂ ಪಾತ್ರ ವಹಿಸುತ್ತದೆ. ಹೌದು, ಭಾಷೆಯಲ್ಲಿ ಕೆಲವು ವಿಶ್ವಾತ್ಮಕ ಮಾದರಿಗಳುಂಟು. ಅವು ಒಂದು ನಿರ್ದಿಷ್ಟ ಭಾಷಾ ನಿಯಮಗಳಂತೆ ಅಂತರ್ಗತವಾಗಿವೆಯೋ ಅಥವಾ ಮನುಷ್ಯನ ಅರಿವಿನ ರಚನೆಯ ಒಂದು ಅಭಿವ್ಯಕ್ತಿಯೋ ಎಂಬುದು ಬೇರೆಯದೇ ಚರ್ಚೆಯಾಗಿದೆ. ಆದ್ದರಿಂದ, ಇಲ್ಲಿನ ಯಾದೃಚ್ಛಿಕತೆಯು ಸೀಮಿತವಾದುದಾಗಿದೆ.

ಹಲವಾರು ಸ್ಥಳಗಳಲ್ಲಿ ಧ್ವನಿ ಮಾದರಿಗಳು ಮತ್ತು ಅರ್ಥ, ಇತ್ಯಾದಿಗಳ ನಡುವಿನ ಸಂಬಂಧವನ್ನು ಭಾಷಾ ಸಮುದಾಯದೊಳಗೆ 'ಸಾರ್ವತ್ರಿಕ ಮತ್ತು ಸ್ಥಿರ' ಎಂದು ಹೇಳಲಾಗುತ್ತದೆ.ಇದನ್ನು ಅರ್ಥ ಮಾಡಿಕೊಳ್ಳುವ ಮಟ್ಟಿಗೆ,

ಒಂದು ನಿರ್ದಿಷ್ಟ ಅವಧಿಗೆ ಸೀಮಿತ ಅರ್ಥದಲ್ಲಿ ಹೀಗೆಂದು ಹೇಳಲಾಗುತ್ತದೆ. ಭಾಷೆಗಳು ಸಮಯಕ್ಕೆ ತಕ್ಕಂತೆ ಮತ್ತು ಅದರ ಭಾಷಿಕರ ಸಮುದಾಯಕ್ಕೆ ತಕ್ಕಂತೆ, ಶೈಲಿಯಲ್ಲಿ ಮತ್ತು ಪದಗಳಿಗೆ ಸಂಬಂಧಿಸಿದ ಅರ್ಥದಲ್ಲಿ ಬದಲಾಗುತ್ತವೆ. ಆದರೆ, ಸಾಮಾನ್ಯವಾಗಿ ಅರ್ಥಮಾಡಿಕೊಂಡಂತೆ, ಅವುಗಳು "ಸಾಮಾನ್ಯವಾಗಿ ಸ್ವೀಕಾರಾರ್ಹ ಮತ್ತು ಸ್ಥಿರವಾಗಿರುವ ಗುಣವನ್ನು ಉಳಿಸಿಕೊಳ್ಳುತ್ತವೆ."

ಕೊನೆಯದಾಗಿ, ಮನುಷ್ಯನಾಗಲು ಭಾಷೆಯು ಕೇಂದ್ರವಾಗಿದೆ. ಭಾಗಶಃ ಸ್ಥಳಾವಕಾಶದ ಕೊರತೆಯಿಂದಾಗಿ ಮತ್ತು ಭಾಗಶಃ ತರಗತಿಯಲ್ಲಿನ ಭಾಷಾ ಬೋಧನೆಯಲ್ಲಿ ತಕ್ಷಣದ ಬಳಕೆಯಾಗಬಹುದಾದ ಕೆಲವು ಅಂಶಗಳನ್ನು ಚರ್ಚಿಸುವುದು ಇಲ್ಲಿ ಮುಖ್ಯವಾಗಿರುವುದರಿಂದ ಈ ಅಂಶವನ್ನು ಇಲ್ಲಿ ವಿವರಿಸಲಾಗಿಲ್ಲ.

ಈ ಲೇಖನವನ್ನು ರೋಹಿತ್ ಧನಕರ್ ಅವರ "ಶಿಕ್ಷಾ ಔರ್ ಸಮಾಜ್" (೨೦೦೪) ಎಂಬ ಪುಸ್ತಕದಲ್ಲಿ ಪ್ರಕಟಿಸಲಾದ "ಭಾಷಾ ಕೆ ಮೈನೆ" ಎಂಬ ಶೀರ್ಷಿಕೆಯ ಮೂಲ ಹಿಂದಿ ಆವೃತ್ತಿಯಿಂದ ಅಳವಡಿಸಿಕೊಳ್ಳಲಾಗಿದೆ. ಈ ಪುಸ್ತಕವನ್ನು ಹರಿಯಾಣದ, ಪಂಚಕುಲದ ಆಧಾರ್ ಪ್ರಕಾಶನ ಪ್ರಕಟಿಸಿದೆ.

ರೋಹಿತ್ ಧನಕರ್‌ರವರು ದಿಗಂತರ್ ಶಿಕ್ಷಾ ಏವಂ ಖೇಲ್ ಕೂದ್ ಸಮಿತಿಯ ಕಾರ್ಯದರ್ಶಿಗಳು. ಗಣಿತಶಾಸ್ತ್ರ ಮತ್ತು ತತ್ವಶಾಸ್ತ್ರದ ವಿದ್ಯಾರ್ಥಿಯಾದ ಅವರು ಉದ್ಯೋಗದ ನೆವದಲ್ಲಿ ಒಂದು ಸಣ್ಣ ಶಾಲೆಯನ್ನು ಪ್ರಾರಂಭಿಸಿದರು. ಶಿಕ್ಷಣದ ಪ್ರಸ್ಥಾನ ಮತ್ತು ತತ್ವಶಾಸ್ತ್ರವು ತುಂಬಾ ಜಟಿಲವಾದುದು. ಇದರ ಪರಿಣಾಮವಾಗಿ ಮಾನವ ಜೀವನದಲ್ಲಿ ಶಿಕ್ಷಣದ ಸ್ಥಾನ ಮತ್ತು ಉತ್ತಮ ಶಾಲೆಯ ಕಲ್ಪನೆಯನ್ನು ಮತ್ತಷ್ಟು ಅನ್ವೇಷಿಸಲು ಅವರಿಗೆ ಕಾರಣವಾಯಿತು. ಮುಂದೆ ಇದುವೆ ಅವರ ಮುಖ್ಯ ಕಾಳಜಿಯಾಯಿತು. ಅಂದಿನಿಂದ ಅವರು ವಿಮೋಚನೆ ಮತ್ತು ಸಬಲೀಕರಣದ ಶಿಕ್ಷಣವನ್ನು ಹೇಗೆ ಸಾಧಿಸಬಹುದು ಮತ್ತು ಇದಕ್ಕಾಗಿ ಯಾವ ಸಾಮಾಜಿಕ ಸ್ಥಳಗಳು ಲಭ್ಯವಿವೆ ಅಥವಾ ಅಂತಹ

**ಸಾಮಾಜಿಕ ಸ್ಥಳವನ್ನು ಹೇಗೆ ರಚಿಸಬೇಕು ಎಂಬುದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಅವರನ್ನು**

rdhankar@gmail.com **ನಲ್ಲಿ ಸಂಪರ್ಕಿಸಬಹುದು.**